# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>**Volume 150** | ಬೆಂಗಳೂರು, ಗುರುವಾರ, ಡಿಸೆಂಬರ್ ೧೦, ೨೦೧೫ (ಮಾರ್ಗಶಿರ ೧೯, ಶಕ ವರ್ಷ ೧೯೩೭)<br>**Bengaluru, Thursday, December 10, 2015 (Margashira 19, Shaka Varsha 1937)** | ಸಂಚಿಕೆ ೪೯<br>**Issue 49** |
|---|---|---|


## ಭಾಗ ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು

### HOME SECRETARIAT

### ADDENDUM TO NOTIFICATION

**NO. ACS/HOME/16/CDR/2014, BENGALURU, DATED: 30-09-2015.**

In exercise of the powers vested under Rule, 2(d) and 4 of The Information Technology (Procedure and Safeguards for Interception, Monitoring and Decryption of Information) Rule, 2009, the Government of Karnataka, in its Notification dated 22-06-2015 has authorised the following Officers of the Karnataka Forest Department to **receive Call Detail Records (CDR) from the service providers while discharging their duties** under The Karnataka Forest Act, 1963 and Wildlife Protection Act, 1972, for a period **from 01-07-2015 upto 30-06-2016.**

In furtherance to the authorisation as above, these officers are **also** authorised to obtain **Subscriber Detail Records (SDR) and tower location details** from Telecom Service Providers(TSPs) during the authorised period **from 01-07-2015 upto 30-06-2016.**

| Sl. | Designation of the Officer | NIC Mail ID |
|---|---|---|
| 1 | APCCF(WL) | apccfwl @aranya.gov.in |
| 2 | CF & Director, BRT, TR | dcfwlchm@aranya.gov.in |
| 3 | CF & Director RGNP Hunsur | dcfhnswl @aranya.gov.in |

By Order and in the Name of Governor of Karnataka

**D. SUGUNA**

Under Secretary to Government

Home Department (CRIMES)

**PR-560**
**SC-300**

### ಆರ್ಥಿಕ ಸಚಿವಾಲಯ

**ಅಧಿಸೂಚನೆ ಸಂಖ್ಯೆ : ಆಇ 3 ಸನಿತಿ 2015, ಬೆಂಗಳೂರು, ದಿನಾಂಕ : 03–08–2015**

ಕರ್ನಾಟಕ ಸರ್ಕಾರವು ದಿನಾಂಕ : 03–02–2001ರ ಅಧಿಸೂಚನೆ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000 ರಲ್ಲಿರುವ ನಿಯಮಗಳನ್ನು ರದ್ದುಪಡಿಸಿ, ಸರ್ಕಾರದ ಅಧಿಕಾರದ ಮೇರೆಗೆ ಸರ್ಕಾರದ ಪ್ರಾಧಿಕಾರದಿಂದ ಅಥವಾ ಸರ್ಕಾರದಿಂದ ರಚಿಸಿದ ಸಮಿತಿ, ಆಯೋಗ ಮತ್ತು ಇತರ ಸಂಸ್ಥೆಗಳ ಅಧಿಕಾರೇತರ ಸದಸ್ಯರಿಗೆ ಪ್ರಯಾಣ ಭತ್ಯೆ ಸಂದಾಯ ಮಾಡುವ ವಿಷಯಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ನಿಯಮಗಳನ್ನು ರಚಿಸಿದೆ. ಅವುಗಳೆಂದರೆ :–

1. ಈ ನಿಯಮಗಳನ್ನು ಪ್ರಯಾಣ ಭತ್ಯೆ ಸಂದಾಯ ಮಾಡುವ (ಸಮಿತಿ, ಆಯೋಗ ಅಥವಾ ಇತರ ಸಂಸ್ಥೆಗಳ ಅಧಿಕಾರೇತರ ಸದಸ್ಯರುಗಳಿಗೆ) ನಿಯಮಗಳು, 2015 ಎಂದು ಕರೆಯತಕ್ಕದ್ದು.

2. ಅವುಗಳು ಈ ಕೂಡಲೇ ಜಾರಿಗೆ ಬರತಕ್ಕದ್ದು.

3. ಅಧಿಕಾರೇತರ ಸದಸ್ಯರುಗಳು ಎಂದರೆ, (ರಾಜ್ಯ ವಿಧಾನಮಂಡಲದ ಸದಸ್ಯರು ಮತ್ತು ಸರ್ಕಾರದ ನಿವೃತ್ತ ಅಧಿಕಾರಿಗಳು ಸೇರಿದಂತೆ)

   i. ರಾಜ್ಯ ಸರ್ಕಾರ ರಚಿಸಿರುವಂಥ ಸಮಿತಿಗಳು, ಆಯೋಗಗಳು ಅಥವಾ ಇತರ ಸಂಸ್ಥೆಗಳ ಸದಸ್ಯರಾಗಿರುವಂಥ ಅಥವಾ :

   ii. ರಾಜ್ಯ ಸರ್ಕಾರವಲ್ಲದೆ ಬೇರೆ ಪ್ರಾಧಿಕಾರವು ರಚಿಸಿರುವಂಥ ಸಮಿತಿಗಳು, ಆಯೋಗಗಳು ಅಥವಾ ಇತರ ಸಂಸ್ಥೆಗಳ ಸಭೆಗಳಲ್ಲಿ ಭಾಗವಹಿಸಲು ರಾಜ್ಯ ಅಥವಾ ರಾಷ್ಟ್ರದ ಒಳಗಡೆ ಅಥವಾ ಹೊರಗಡೆಯ ಸ್ಥಳಗಳಿಗೆ ಸರ್ಕಾರದಿಂದ ಪ್ರತ್ಯಾಯೋಜನೆಗೊಂಡಿರುವಂಥ ಅಥವಾ :

   iii. ರಾಜ್ಯ ಸರ್ಕಾರದ ವ್ಯವಹಾರಗಳ ಸಂಬಂಧದಲ್ಲಿ ವಿಶೇಷ ಕೆಲಸದ ಮೇಲೆ ಸರ್ಕಾರದಿಂದ ಪ್ರತ್ಯಾಯೋಜನೆಗೊಂಡಿರುವಂತಹವರಿಗೆ ಈ ಮುಂದೆ ಹೇಳಿರುವಂತೆ ಪ್ರಯಾಣ ಭತ್ಯೆಯನ್ನು ವಿನಿಯಮಿಸಲಾಗಿದೆ.

(ಎ) ರಾಜ್ಯದೊಳಗಡೆ ಅಥವಾ ಹೊರಗಡೆಯ ಪ್ರಯಾಣಗಳು.

**(1) ರೈಲ್ವೆ ದರ :**

ರೈಲು ಸಂಪರ್ಕವಿರುವ ಸ್ಥಳಗಳಿಗೆ ಅವನು ಕಡಿಮೆ ಅಂತರದ ಮಾರ್ಗಕ್ಕೆ ಟ್ರಾವೆಲಿಂಗ್ ಏಜೆಂಟನಿಗೆ ಸಂದಾಯ ಮಾಡಿದ ವೆಚ್ಚವನ್ನು ಹೊರತುಪಡಿಸಿ ಕಾಯ್ದಿರಿಸುವ ವೆಚ್ಚವೂ ಸೇರಿದಂತೆ ಪ್ರಥಮ ದರ್ಜೆ ರೈಲ್ವೆದರ ಅಥವಾ ವಾಸ್ತವವಾಗಿ ಸಂದಾಯ ಮಾಡಿದ ರೈಲ್ವೆದರ ಇದರಲ್ಲಿ ಯಾವುದು ಕಡಿಮೆಯೋ ಆ ದರವನ್ನು ಪಡೆಯಲು ಅರ್ಹನಾಗಿರತಕ್ಕದ್ದು. ಸಭೆಗಳನ್ನು ಮುಂದೂಡಿದ ಕಾರಣದ ಮೇಲೆ ಅಧಿಕಾರೇತರ ಸದಸ್ಯರು ರೈಲು ಪ್ರಯಾಣವನ್ನು ರದ್ದುಮಾಡಿದರೆ ಅವನು ಕಾಯ್ದಿರಿಸಿದ ರೈಲ್ವೆ ಟಿಕೇಟುಗಳ ಮೇಲೆ (ಕಾಯ್ದಿರಿಸುವಿಕೆ ದರಗಳನ್ನು ಹೊರತುಪಡಿಸಿ) ರದ್ದುಗೊಳಿಸಿದ ದರಗಳನ್ನು ಮರುಪಾವತಿ ಮಾಡುವ ತನ್ನ ಕ್ಲೇಮನ್ನು ಸಮುಚಿತ ರೈಲ್ವೆ ಪ್ರಾಧಿಕಾರಿಗೆ ಸಲ್ಲಿಸಬಹುದು. ಅವನ ಪ್ರಯಾಣ ಭತ್ಯೆ ಬಿಲ್ಲಿಗೆ ಮೇಲು ರುಜು ಮಾಡಲು ಕ್ಲೇಮಿನ ಜೊತೆಗೆ ಸಭೆ ಮುಂದೂಡಿಕೆ ಕಾರಣದ ಮೇಲೆ ಪ್ರಯಾಣ ರದ್ದುಪಡಿಸಲಾಯಿತೆಂದು ತಿಳಿಸುವ ಸಕ್ಷಮ ಪ್ರಾಧಿಕಾರಿಯ ಪ್ರಮಾಣಪತ್ರವನ್ನು ಲಗತ್ತಿಸಬೇಕು.

**(2) ಬಸ್ ದರ :**

(ಎ) ರೈಲ್ವೆ ಸಂಪರ್ಕವಿರದ ಸ್ಥಳಗಳಿಗೆ ಅವನು ಟ್ರಾವೆಲ್ ಏಜೆಂಟನಿಗೆ ಸಂದಾಯ ಮಾಡಿದ ಏಜೆನ್ಸಿ ವೆಚ್ಚವನ್ನು ಬಿಟ್ಟು ಆದರೆ ಕಾಯ್ದಿರಿಸುವಿಕೆ ವೆಚ್ಚವೂ ಸೇರಿದಂತೆ ಕಡಿಮೆ ಅಂತರದ ಮಾರ್ಗಕ್ಕೆ ಬಸ್‌ದರ ಪಡೆಯಲು ಅರ್ಹನಾಗಿರತಕ್ಕದ್ದು.

(ಬಿ) ಭಾಗಶಃ ರೈಲ್ವೆ ಮತ್ತು ಭಾಗಶಃ ರಸ್ತೆ ಸಂಪರ್ಕವಿರುವಂಥ ಸ್ಥಳಗಳಿಗೆ ಅವನು ಕಡಿಮೆ ಅಂತರದ ಮಾರ್ಗದ ಮೂಲಕ ಬಸ್‌ನಲ್ಲಿ ಪ್ರಯಾಣಿಸಬಹುದು ಮತ್ತು ಟ್ರಾವೆಲ್ ಏಜೆಂಟನಿಗೆ ಸಂದಾಯ ಮಾಡಿದ ಏಜೆನ್ಸಿ, ವೆಚ್ಚಗಳನ್ನು ಬಿಟ್ಟು ಕಾಯ್ದಿರಿಸುವಿಕೆ ವೆಚ್ಚ ಸೇರಿದಂತೆ ಬಸ್‌ದರ ಕ್ಲೇಮು ಮಾಡಬಹುದು.

**(3) ಮೈಲು ಭತ್ಯೆ :**

ಅವನು ಈ ಮುಂದೆ ಹೇಳಿರುವ ದರಗಳಲ್ಲಿ ಮನೆಯಿಂದ ರೈಲ್ವೆ ನಿಲ್ದಾಣ ಅಥವಾ ಬಸ್ ನಿಲ್ದಾಣಕ್ಕೆ ಮತ್ತು ಇದಕ್ಕೆ ವಿಪರ್ಯಯವಾಗಿ ಹಾಗೂ ರೈಲ್ವೆ ನಿಲ್ದಾಣ ಅಥವಾ ಬಸ್ ನಿಲ್ದಾಣದಿಂದ ಸಭೆ ನಡೆಯುವ ಸ್ಥಳಕ್ಕೆ ಮತ್ತು ಇದಕ್ಕೆ ವಿಪರ್ಯಯವಾಗಿ ಮೇಲು ಪ್ರಯಾಣಭತ್ಯೆ ಪಡೆಯಲು ಅರ್ಹನಾಗಿರತಕ್ಕದ್ದು.

(ಎ) ಈ ಮುಂದೆ ಹೇಳುವ ರೀತಿಯಲ್ಲಿ ಮಾಡುವ ಪ್ರಯಾಣಗಳಲ್ಲಿ :

| ಮೋಟಾರು ಸೈಕಲ್/ಸ್ಕೂಟರ್/ಟಾಂಗಾ/ಸೈಕಲ್ ರಿಕ್ಷಾ/ಮಾನವ ಚಾಲಿತ ರಿಕ್ಷಾ | ಪೂರ್ಣ ಟ್ಯಾಕ್ಸಿ/ಸ್ವಂತ ಕಾರ್ | ಆಟೋ ರಿಕ್ಷಾ |
|---|---|---|
| ಪ್ರತಿ ಕಿ.ಮೀ.ಗೆ 2/– ರೂಪಾಯಿ | ಪ್ರತಿ ಕಿ.ಮೀ.ಗೆ ಹವಾನಿಯಂತ್ರಿತ ಟ್ಯಾಕ್ಸಿಗೆ ಸಾರಿಗೆ ಆಯುಕ್ತರು ನಿಗಧಿಪಡಿಸಿದ ದರ | ಸಾರಿಗೆ ಆಯುಕ್ತರು ನಿಗಧಿಪಡಿಸಿದ ಕನಿಷ್ಠ ದರ ಮತ್ತು ಪ್ರತಿ ಕಿ.ಮೀ. ದರ |

(ಬಿ) ಸದಸ್ಯನು ಸಾಧಾರಣವಾಗಿ ತಾನು ವಾಸಿಸುತ್ತಿರುವ ಸ್ಥಳದಲ್ಲಿಯೇ ಸಮಿತಿಯ ಸಭೆಗೆ ಹಾಜರಾದರೆ ಮೈಲು ಪ್ರಯಾಣ ಭತ್ಯೆಯನ್ನು ಸಂದಾಯ ಮಾಡತಕ್ಕದ್ದಲ್ಲ.

**(4) ಸಮುದ್ರ ಪ್ರಯಾಣ :**

ಸಮುದ್ರ ಪ್ರಯಾಣ ಅಥವಾ ನದಿಯ ಮೇಲೆ ಸ್ಟೀಮರ್‌ನ ಪ್ರಯಾಣಗಳಲ್ಲಿ ಸದಸ್ಯನು ಹೆಚ್ಚಿನ ಮೇಲಿನ ದರ್ಜೆಯ ವಾಸ್ತವಕ್ಕೆ ಕಡಿಮೆ ಬೆಲೆಯಿರುವ ಒಂದು ಪ್ರಯಾಣಭತ್ಯೆಗೆ (ಡಯಟ ಖರ್ಚನ್ನು ಬಿಟ್ಟು) ಅರ್ಹನಾಗಿರುತ್ತಾನೆ.

**(5) ವಿಮಾನ ಪ್ರಯಾಣಗಳು :**

i. ವಿಮಾನ ಪ್ರಯಾಣಕ್ಕೆ ಸರ್ಕಾರದ ವಿಶೇಷ ಮಂಜೂರಾತಿ ಅಗತ್ಯ ಅತ್ಯಂತ ತುರ್ತು ಸಂದರ್ಭಗಳಿಂದಾಗಿ ಅನಿವಾರ್ಯವಾಗಿ ವಿಮಾನ ಪ್ರಯಾಣ ಕೈಗೊಳ್ಳಬೇಕಾದ ಪ್ರಕರಣಗಳಲ್ಲಿ ಮಾತ್ರ ಈ ಮಂಜೂರಾತಿ ನೀಡಬಹುದಾಗಿರುತ್ತದೆ.

ii. ಮರುಪ್ರಯಾಣ ಟಿಕೆಟ್ (ರಿಟರ್ನ್ ಟಿಕೆಟ್) ಚಾಲ್ತಿಯಲ್ಲಿರುವ ಅವಧಿಯೊಳಗೆ ವಾಪಸ್ಸು ಪ್ರಯಾಣ ಮಾಡಬಹುದೆಂಬ ನಿರೀಕ್ಷೆಯಿದ್ದರೆ ರಿಟರ್ನ್ ಟಿಕೆಟ್‌ಗಳು ಇಳಿತಾಯದ ದರಗಳಲ್ಲಿ ಲಭ್ಯವಿದ್ದಲ್ಲಿ ಅವುಗಳನ್ನು ಖರೀದಿಸತಕ್ಕದ್ದು. ಅಂಥ ರಿಟರ್ನ್ ಟಿಕೆಟ್‌ಗಳಲ್ಲಿ ಹೋಗುವ ಮತ್ತು ವಾಪಸ್ಸು ಬರುವ ಪ್ರಯಾಣ ಮೇಲಿನ ಮೈಲು ಭತ್ಯೆಯು ಅಂಥ ರಿಟರ್ನ್ ಟಿಕೇಟ್‌ನ ವಾಸ್ತವಿಕ ಬೆಲೆಯಷ್ಟು ಇರತಕ್ಕದ್ದು.

iii. ಈ ಮೇಲೆ ನಿರ್ದಿಷ್ಟಪಡಿಸಿದ ರಸ್ತೆ ಮೈಲು ದರವನ್ನು ಲೆಕ್ಕ ಹಾಕಬೇಕಾದರೆ ಪ್ರಯಾಣ ಪ್ರಾರಂಭವಾಗುವ ಸ್ಥಳದಿಂದ ವಿಮಾನ ಸಾರಿಗೆ ಕಂಪನಿಗಳ ಕಾಯ್ದಿರಿಸುವ ಕಛೇರಿಯವರೆಗೆ ಮತ್ತು ಪ್ರಯಾಣ ಪ್ರಾರಂಭವಾಗುವಂಥ ಅಥವಾ ಮುಕ್ತಾಯಗೊಳ್ಳುವಂಥ ಯಾವುದೇ ಕೇಂದ್ರ ಸ್ಥಳವು ಮುಖ್ಯ ಸಾರ್ವಜನಿಕ ಕಛೇರಿ ಅಥವಾ ಮೇಲೆ ಹೇಳಿದ ಉದ್ದೇಶಕ್ಕಾಗಿ ಸರ್ಕಾರ ನಿಗಧಿಪಡಿಸಬಹುದಾದ ಇತರ ಯಾವುದೇ ಸ್ಥಳವಾಗಿರತಕ್ಕದ್ದು. ಕರ್ನಾಟಕ ಲೋಕೋಪಯೋಗಿ ಇಲಾಖೆಯು ನೀಡಿದಂತಹ ರಸ್ತೆ ನಕ್ಷೆಯ ಮೂಲಕ ದೂರವನ್ನು ಲೆಕ್ಕ ಹಾಕಿದ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿನ ಸಾರ್ವಜನಿಕ ಕಛೇರಿಗಳೂ ಮತ್ತು ಇತರ ಸ್ಥಳಗಳಲ್ಲಿನ ಪ್ರವಾಸಿ ಮಂದಿರ ಅಥವಾ ನಿರೀಕ್ಷಣಾ ಮಂದಿರಗಳನ್ನು ಈ ಉದ್ದೇಶಕ್ಕಾಗಿ ಸರ್ಕಾರವು ನಿಗಧಿ ಮಾಡಿದ ಸ್ಥಳ ಎಂದು ಪರಿಗಣಿಸಲಾಗುವುದು.

iv. ವಿಮಾನ ಪ್ರಯಾಣ ಎಂದರೆ ಬಾಡಿಗೆಗಾಗಿ ನಿಯತವಾಗಿ ಓಡಾಡುವ ಸಾರ್ವಜನಿಕ ವಾಯು ಸಾರಿಗೆ ಕಂಪನಿಗಳ ವಿಮಾನದಲ್ಲಿ ಕೈಗೊಳ್ಳುವ ಪ್ರಯಾಣಗಳು ಎಂದರ್ಥ. ಇದರಲ್ಲಿ ಖಾಸಗಿ ವಿಮಾನ ಅಥವಾ ಏರ್ ಟ್ಯಾಕ್ಸಿಗಳಲ್ಲಿ ಮಾಡುವ ಪ್ರಯಾಣಗಳು ಒಳಗೊಳ್ಳುವುದಿಲ್ಲ.

v. ವಿಮಾನ ಪ್ರಯಾಣದ ವಿಮೆಯನ್ನು ಸರ್ಕಾರವು ಭರಿಸುವುದು. ವಿಮಾನ ಪ್ರಯಾಣಗಳ ವಿಮಾ ಕಂತಿನ ಕ್ಲೇಮುಗಳಿಗೆ ವಿಮಾ ಕಂಪನಿಗಳು ನೀಡುವ ಪಾಲಿಸಿಗಳ ಸ್ವೀಕೃತಿಗಳನ್ನು ತಪ್ಪದೇ ಹಾಜರುಪಡಿಸತಕ್ಕದ್ದು.

vi. ಭಾರತದ ಹೊರಗೆ : ಪ್ರತ್ಯೇಕ ಪ್ರಕರಣಗಳಲ್ಲಿ ಕಾಲಕಾಲಕ್ಕೆ ಸರ್ಕಾರವು ನಿಗಧಿಪಡಿಸಬಹುದಾದಂತಹ ದರಗಳು.

(6) ಸಮಿತಿಯ ಅಧಿಕಾರೇತರ ಸದಸ್ಯರು ತಮ್ಮ ಆಯ್ಕೆಯ ಮೇರೆಗೆ ಉಪಸ್ಥಿತಿಭತ್ಯೆಗೆ ಬದಲಾಗಿ ಎ ಗುಂಪಿಗೆ ಸೇರಿದ ಸರ್ಕಾರಿ ನೌಕರನಿಗೆ ಅನ್ವಯವಾಗಬಹುದಾದ ದರಗಳಲ್ಲಿ ದಿನಭತ್ಯೆಯನ್ನು ಪಡೆಯಲು ಅನುಮತಿಸಬಹುದು.

(7) **ಉಪಸ್ಥಿತಿ ಭತ್ಯೆಗಳು :**

ಅವರು ಒಂದು ದಿನದ ಸಭೆಗೆ ಈ ಕೆಳಗಿನ ದರಗಳಲ್ಲಿ ಉಪಸ್ಥಿತಿ ಭತ್ಯೆಗೆ ಅರ್ಹರಾಗಿರುತ್ತಾರೆ.

**(ಎ) ರಾಜ್ಯದ ಒಳಗೆ ಸಭೆ ನಡೆಯುವ ಸ್ಥಳ :**

i. ಬೆಂಗಳೂರು ರೂ. 500/– (ಐದು ನೂರು ರೂಪಾಯಿಗಳು)

ii. ಮಹಾನಗರಪಾಲಿಕೆಗಳಿರುವ ಇತರ ನಗರಗಳು ರೂ. 350/– (ಮುನ್ನೂರ ಐವತ್ತು ರೂಪಾಯಿಗಳು)

iii. ಇತರೆ ಸ್ಥಳಗಳು ರೂ. 250/– (ಇನ್ನೂರ ಐವತ್ತು ರೂಪಾಯಿಗಳು)

**(ಬಿ) ರಾಜ್ಯದ ಹೊರಗೆ ಸಭೆ ನಡೆಯುವ ಸ್ಥಳಗಳು :–**

i. ಅಹಮದಬಾದ್, ಮುಂಬೈ, ಕಲ್ಕತ್ತ, ದೆಹಲಿ, ಗಜಿಯಾಬಾದ್, ಕಾನ್‌ಪುರ, ಹೈದರಾಬಾದ್, ಲಕ್ನೋ, ಚೆನ್ನೈ, ಮಸ್ಸೂರಿ, ನಾಗಪುರ, ಪುಣೆ, ಸಿಮ್ಲಾ, ಶ್ರೀನಗರ್, ಗೋವಾ, ಡಯು ಮತ್ತು ದಮನ್ ರೂ. 1000/– (ಒಂದು ಸಾವಿರ ರೂಪಾಯಿಗಳು.)

ii. ಇತರ ಸ್ಥಳಗಳು ರೂ. 750/– (ಏಳು ನೂರ ಐವತ್ತು ರೂಪಾಯಿಗಳು).

4. ಸರ್ಕಾರವು ವಿಶೇಷ ಸಂದರ್ಭಗಳಲ್ಲಿ ಪ್ರಯಾಣ ಭತ್ಯೆಯ ಜೊತೆಗೆ ಸಾರಿಗೆ ಭತ್ಯೆಯ ನಿರ್ದಿಷ್ಟ ದರಗಳು ಅಥವಾ ಬಾಡಿಗೆ ಸಾರಿಗೆ ವಾಹನಕ್ಕೆ ಭರಿಸಿದ ವಾಸ್ತವಿಕ ವೆಚ್ಚಗಳು ಅಥವಾ ಇತರ ವೆಚ್ಚಗಳನ್ನು ಮಂಜೂರು ಮಾಡಬಹುದು.

5. ಅಂತಿಮ ಪ್ರಯಾಣ ಭತ್ಯೆಯ ಬಿಲ್ಲುಗಳಿಂದ ಹೊಂದಾಣಿಕೆ ಮಾಡುವುದಕ್ಕೆ ಒಳಪಟ್ಟು ಸರ್ಕಾರವು ಪ್ರಯಾಣದ ಖರ್ಚುಗಳನ್ನು ಭರಿಸುವುದಕ್ಕೆ ಮುಂಗಡವನ್ನು ಸಂದಾಯ ಮಾಡಬಹುದು. ಮುಂಗಡಗಳು ಸಾಮಾನ್ಯವಾಗಿ ಗ್ರಾಹ್ಯವಾಗುವ ಭತ್ಯೆಯ ಮೊತ್ತದ ನಾಲ್ಕನೇ ಮೂರರಷ್ಟಕ್ಕಿಂತ ಹೆಚ್ಚಾಗಬಾರದು. ಈ ಮಿತಿಯನ್ನು ವಿಶೇಷ ಪ್ರಕರಣಗಳಲ್ಲಿ ಸರ್ಕಾರದ ನಿರ್ದಿಷ್ಟ ಆದೇಶದ ಮೂಲಕ ಹೆಚ್ಚಿಸಬಹುದು.

6. ಸಮಿತಿಯ ಸದಸ್ಯ ಅಥವಾ ಕಾರ್ಯದರ್ಶಿಯಾಗಿರಬಹುದಾದಂತಹ ಒಬ್ಬ ಅಧಿಕಾರಿಯು ಅಥವಾ ಸರ್ಕಾರದ ಇತರೆ ಅಧಿಕಾರಿಯು ಸಮಿತಿಗಳ ಅಧಿಕಾರೇತರ ಸದಸ್ಯರುಗಳಿಗೆ ಸಂದಾಯ ಮಾಡಿದಂಥ ಮುಂಗಡಗಳ ಬಟವಾಡೆ ಮತ್ತು ಅಂತಿಮ ಹೊಂದಾಣಿಕೆಗಳಿಗೆ ಜವಾಬ್ದಾರನಾಗಿರತಕ್ಕದ್ದು. ಇಂಥ ಮುಂಗಡಗಳನ್ನು ನೀಡುವ ಮುನ್ನ ಪ್ರತಿಯೊಬ್ಬ ಅಧಿಕಾರೇತರ ಸದಸ್ಯನಿಂದ ಈ ಮುಂದಿನ ನಮೂನೆಯಲ್ಲಿ ಲಿಖಿತ ಮುಚ್ಚಳಿಕೆಯನ್ನು ಪಡೆಯತಕ್ಕದ್ದು. ಮೊದಲನೆಯ ಮುಂಗಡವು ಹೊಂದಾಣಿಕೆ ಆಗುವವರೆಗೆ ಎರಡನೆಯ ಮುಂಗಡವನ್ನು ಮಂಜೂರು ಮಾಡತಕ್ಕದ್ದಲ್ಲ.

**ನಮೂನೆ**

ಕರ್ನಾಟಕ ಸರ್ಕಾರದಿಂದ ನೇಮಕ ಮಾಡಲ್ಪಟ್ಟ ಸಮಿತಿ : ಆಯೋಗದ ಸದಸ್ಯ ____________________ ಆದ ನಾನು ಮೇಲಿನ ಸದರಿ ಸಮಿತಿ : ಆಯೋಗದ ಸದಸ್ಯನಾಗಿ ನನ್ನ ಕರ್ತವ್ಯಗಳಿಗೆ ಸಂಬಂಧಪಟ್ಟಂತೆ ಕೆಲವು ಪ್ರಯಾಣಗಳನ್ನು ಕೈಗೊಳ್ಳಲು ಕರ್ನಾಟಕ ಸರ್ಕಾರದಿಂದ ಮುಂಗಡವಾಗಿ ____________________ ರೂಪಾಯಿಗಳ (ರೂಪಾಯಿಗಳು ಅಕ್ಷರಗಳಲ್ಲಿ) ಮೊತ್ತವನ್ನು ಸ್ವೀಕರಿಸುತ್ತಾ ನಿರ್ದಿಷ್ಟಪಡಿಸಿದ ಪ್ರಯಾಣಗಳು ಪೂರ್ಣಗೊಂಡ ಕೂಡಲೇ ನನ್ನ ಪ್ರಯಾಣಭತ್ಯೆಯ ಬಗ್ಗೆ ಪ್ರತಿಯಾಗಿ ಮೊತ್ತವನ್ನು ಹೊಂದಾಣಿಕೆ ಮಾಡಲಾಗದಿದ್ದಲ್ಲಿ ಮುಂಗಡದ ಯಾವುದೇ ಭಾಗವನ್ನು ನಾನು ಸರ್ಕಾರಕ್ಕೆ ಕೂಡಲೇ ಹಿಂದಿರುಗಿಸುತ್ತೇನೆಂದು ಈ ಮೂಲಕ ಒಪ್ಪುತ್ತೇನೆ. ಯಾವುದೇ ಕಾರಣಕ್ಕಾಗಿ ನಿರ್ದಿಷ್ಟಪಡಿಸಿದ ಪ್ರಯಾಣಗಳನ್ನು ಕೈಗೊಳ್ಳದಿದ್ದಲ್ಲಿ ಇಡೀ ಮುಂಗಡದ ಮೊತ್ತವನ್ನು ಕೇಳಿದ ಕೂಡಲೇ ಅದನ್ನು ಕರ್ನಾಟಕ ಸರ್ಕಾರಕ್ಕೆ ಹಿಂದಿರುಗಿಸುತ್ತೇನೆಂದು ನಾನು ಈ ಮೂಲಕ ಒಪ್ಪುತ್ತೇನೆ.

ರೆವಿನ್ಯೂ ಸ್ಟಾಂಪ್

ಸದಸ್ಯರ ಸಹಿ

7. ಮೇಲೆ ನಿರ್ದಿಷ್ಟಪಡಿಸಿದ ಮಾರ್ಪಾಡುಗಳಿಗೆ ಒಳಪಟ್ಟು ಒಂದು ನಿರ್ದಿಷ್ಟ ನಿಯಮದ ಅಗತ್ಯತೆಯನ್ನು ಸರ್ಕಾರದ ವಿಶೇಷ ಆದೇಶದ ಮೂಲಕ ರದ್ದುಗೊಳಿಸಿದ ಹೊರತು ಸರ್ಕಾರಿ ಅಧಿಕಾರಿಗಳಿಗೆ ಪ್ರಯಾಣಭತ್ಯೆ ಸಂದಾಯವನ್ನು ವಿನಿಯಮಿಸುವ ನಿಯಮಗಳೇ ಅಧಿಕಾರೇತರರ ಪ್ರಯಾಣಭತ್ಯೆಯ ಸಂದಾಯಕ್ಕೂ ಅನ್ವಯ ಮಾಡುವ ನಿಯಮಗಳಾಗಿರುತ್ತದೆ. ಸಭೆಯ ಸ್ಥಳಕ್ಕೆ ಆಗಮಿಸಿದ ಅಥವಾ ನಿರ್ಗಮಿಸಿದ ಸಮಯವನ್ನು ಪರಿಗಣಿಸದೆ ಪ್ರಯಾಣಗಳಿಗೆ ಅನ್ವಯವಾಗುವ ಪ್ರಯಾಣಭತ್ಯೆಯಲ್ಲದೆ ಸಮಿತಿಯನ್ನು ರಚಿಸಿದ ಸರ್ಕಾರಿ ಆದೇಶದಲ್ಲಿ ಯಾವ ಪದವನ್ನು ಬಳಸಲಾಗಿದೆಯೋ ಅದರಂತೆ ಅನುಮತಿಸಲಾದ ಉಪಸ್ಥಿತಿ ಭತ್ಯೆ, ದಿನಭತ್ಯೆ ಅಥವಾ ತಂಗು ಭತ್ಯೆಗಳು ಸಭೆಯ ದಿನಗಳ ಮೇಲೆಯೂ ಗ್ರಾಹ್ಯವಾಗುತ್ತವೆ.

8. ಪ್ರತ್ಯೇಕ ಪ್ರಕರಣಗಳಲ್ಲಿ ಸಂದರ್ಭಗಳ ಸಮರ್ಥನೆ ಇದ್ದರೆ ಸರ್ಕಾರವು ವಿಶೇಷ ದರಗಳನ್ನು ಮಂಜೂರು ಮಾಡಬಹುದು.

**9. ರಸ್ತೆ ಮೈಲುಭತ್ಯೆ :**

(1) ಅಧಿಕಾರೇತರ ಸದಸ್ಯನು ಬಸ್ಸಿನಲ್ಲಿ 32 ಕಿ.ಮೀ.ಗಳು ಅಥವಾ ಅದಕ್ಕಿಂತಲೂ ಹೆಚ್ಚಿನ ದೂರ ಪ್ರಯಾಣ ಮಾಡಿದರೆ, ಅವನಿಗೆ ಬಸ್ಸು ದರದ 1 1/2 ಯಷ್ಟು ಮತ್ತು ಅದರ ಜೊತೆಗೆ ರಸ್ತೆ ಮೈಲು ಭತ್ಯೆಗೆ ಪರಿಮಿತಿಗೊಳಿಸಲಾದ ದಿನಭತ್ಯೆಯನ್ನು ಅನುಮತಿಸಬಹುದು. ಅಧಿಕಾರೇತರ ಸದಸ್ಯನು ಬಸ್ಸಿನಲ್ಲಿ 32 ಕಿ.ಮೀ. ಗಳಿಗಿಂತಲೂ ಕಡಿಮೆ ದೂರ ಪ್ರಯಾಣ ಮಾಡಿದರೆ ಅವನು ರಸ್ತೆ ಮೈಲು ಭತ್ಯೆಯ ಪರಿಮಿತಿಗೊಳಪಟ್ಟು 1 1/2 ಬಸ್ ಪ್ರಯಾಣ ದರವನ್ನು ಮಾತ್ರ ಪಡೆಯಬಹುದು.

(2) ಎರಡನೇ ದರ್ಜೆಗಿಂತ ಹೆಚ್ಚಿನ ರೈಲ್ವೆ ದರಗಳನ್ನು ಪಡೆಯಲು ಅರ್ಹರಾಗಿರುವಂಥ ಸಮಿತಿಗಳ ಅಧಿಕಾರೇತರ ಸದಸ್ಯರು ನಿವೃತ್ತ ಅಧಿಕಾರಿಗಳೂ ಸೇರಿದಂತೆ ತಾವು ಯಾವ ದರ್ಜೆಯ ರೈಲ್ವೆ ಪ್ರಯಾಣ ದರವನ್ನು ಕೋರುವರೋ ಆ ದರ್ಜೆಯಲ್ಲಿ ಪ್ರಯಾಣ ಮಾಡಿರುವುದಾಗಿ ಪ್ರಮಾಣ ಪತ್ರವನ್ನು ಪ್ರಯಾಣ ಭತ್ಯೆಯ ಬಿಲ್ಲಿನಲ್ಲಿ ದಾಖಲು ಮಾಡತಕ್ಕದ್ದು. ಇಲ್ಲದಿದ್ದರೆ, ಆ ಅಧಿಕಾರಿಗೆ ಅವರು ವಾಸ್ತವವಾಗಿ ಪ್ರಯಾಣ ಮಾಡಿದ ದರ್ಜೆಯ ರೈಲು ಪ್ರಯಾಣ ದರವನ್ನು ನೀಡಲಾಗುವುದು.

(3) ಹಲವು ಸಂಸ್ಥೆಗಳ ಸ್ಥಾಯಿ ಸಮಿತಿಗಳು, ಉಪಸಮಿತಿಗಳು, ಆಯ್ದ ಸಮಿತಿ, ವಿಶೇಷ ಸಮಿತಿಗಳು ಮುಂತಾದವುಗಳಲ್ಲಿಯ ಹಾಜರಾತಿಯನ್ನು ಈ ನಿಯಮಗಳ ಉದ್ದೇಶಕ್ಕಾಗಿ ಸದರಿ ಸಂಸ್ಥೆಗಳು ನಡೆಸಿದ ಸಭೆಗಳ ಹಾಜರಾತಿಯೆಂದೇ ಪರಿಗಣಿಸಲಾಗುವುದು.

(4) ಅಧಿಕಾರೇತರ ಸದಸ್ಯರು ತಮ್ಮ ಸಾಮಾನ್ಯ ವಾಸ ಸ್ಥಳದಿಂದ ಸಭೆ ನಡೆಯುವ ಸ್ಥಳದವರೆಗೆ ಮತ್ತು ಅಲ್ಲಿಂದ ಹಿಂದೆ ತಮ್ಮ ವಾಸಸ್ಥಳದವರೆಗೆ ಹೋಗಿಬರಲು ಲೆಕ್ಕ ಮಾಡಿದ ಪ್ರಕಾರ ಪ್ರಯಾಣಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಮುಂದೂಡಿದ ಸಭೆ ಅಥವಾ ಅದೇ ಸ್ಥಳದಲ್ಲಿ ನಡೆಯುವ ಮತ್ತೊಂದು ಸಭೆಯಲ್ಲಿ ಭಾಗವಹಿಸಲು ಅಲ್ಲಿ ತಂಗುವ ಪ್ರಸಂಗ ಬಂದಲ್ಲಿ ಸದಸ್ಯರಿಗೆ ಈ ಮುಂದಿನ ಷರತ್ತುಗಳಿಗೊಳಪಟ್ಟು ದಿನಭತ್ಯೆ ನೀಡಲಾಗುವುದು.

(ಎ) ಅಂಥ ತಂಗುವಿಕೆ ಒಟ್ಟು ದಿನಭತ್ಯೆಯು ಆತನ ವಾಸಸ್ಥಳಕ್ಕೆ ವಾಪಸ್ಸಾಗಲು ಮತ್ತು ಮುಂದೂಡಿದ ಸಭೆಗೆ ಅಥವಾ ಮತ್ತೊಂದು ಸಭೆಗೆ ಹಾಜರಾಗಲು ವಾಪಸ್ಸು ಬರುವುದಕ್ಕೆ ಗ್ರಾಹ್ಯವಾಗುವ ಪ್ರಯಾಣ ಭತ್ಯೆ ಮೊತ್ತಕ್ಕೆ ಸೀಮಿತಗೊಂಡಿರುತ್ತದೆ.

(ಬಿ) ಈ ಉದ್ದೇಶಕ್ಕಾಗಿ ಎರಡೂ ಸಭೆಗಳನ್ನು ಒಂದೇ ಎಂಬುದಾಗಿ ಪರಿಗಣಿಸಿ ಬಂದು ಹೋಗುವ ಪ್ರಯಾಣಕ್ಕೆ ಒಮ್ಮೆ ಮಾತ್ರ ಪ್ರಯಾಣಭತ್ಯೆ ನೀಡಲಾಗುವುದು ; ಮತ್ತು

(ಸಿ) ದಿನಭತ್ಯೆಯನ್ನು ಮೊದಲು ಸಭೆಗೆ ಸಂಬಂಧಿಸಿದ ಲೆಕ್ಕ ಶೀರ್ಷಿಕೆಯ ವೆಚ್ಚಕ್ಕೆ ಖರ್ಚು ಹಾಕಲಾಗುತ್ತದೆ.

(5) ಎರಡು ಕ್ರಮಾನುಗತ ಸಭೆಗಳ ನಡುವೆ ಭಾನುವಾರ ಅಥವಾ ಇತರ ರಜೆಯು ಮಧ್ಯ ಬಂದರೆ ಅಂಥ ದಿನಗಳಿಗೆ ತಂಗುವ ಭತ್ಯೆಯನ್ನು ಸದಸ್ಯರು ಎರಡು ಸಭೆಗಳ ಮಧ್ಯ ಬರುವ ಭಾನುವಾರ ಅಥವಾ ರಜಾ ದಿನಗಳಂದು ಸಭೆ ನಡೆಯುವ ಸ್ಥಳದಲ್ಲಿ ಉಳಿದುಕೊಂಡರೆ ಮಾತ್ರ ನೀಡಲಾಗುತ್ತದೆ.

10. (1) ರಾಜ್ಯ ವಿಧಾನ ಮಂಡಲದ ಸದಸ್ಯರು ಸರ್ಕಾರದಿಂದ ರಚಿತವಾದ 1966ರ ಕರ್ನಾಟಕ ವಿಧಾನಮಂಡಲದ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳು ಅಧಿನಿಯಮದ ಮೇರೆಗೆ ಸಮಿತಿಗಳ ಸಭೆಗಳಿಗೆ ಹಾಜರಾಗುವುದಕ್ಕಾಗಿ ಅಂದರೆ ವಿಧಾನ ಸಭೆಗೆ ಅಥವಾ ವಿಧಾನಪರಿಷತ್ತು ಅಥವಾ ಸದರಿ ಸಭೆ ಅಥವಾ ಪರಿಷತ್ತಿನ ಯಾವುದೇ ಸಮಿತಿಗಳ ಹೊರತಾಗಿ ಇತರ ಸಮಿತಿಗಳ ಸಭೆಗಳಿಗೆ ಯಾವ ದಿನಕ್ಕಾಗಿ ಅವರು ವಿಧನಸಭೆಯ ಅಥವಾ ವಿಧಾನಪರಿಷತ್ತಿನ ಯಾವುದೇ ಸಭೆಗಳಿಗೆ ಹಾಜರಾಗುವುದಕ್ಕಾಗಿ ಪ್ರಯಾಣ ಭತ್ಯೆ ಅಥವಾ ದಿನಭತ್ಯೆಯನ್ನು ತೆಗೆದುಕೊಳ್ಳುವರೋ ಆ ದಿನಗಳಿಗೆ ಪ್ರಯಾಣಭತ್ಯೆ ಅಥವಾ ದಿನಭತ್ಯೆ ತೆಗೆದುಕೊಳ್ಳಲು ಅರ್ಹರಾಗಿರುವುದಿಲ್ಲ.

(2) ಈ ಮೇಲಿನ ಷರತ್ತುಗಳಿಗೊಳಪಟ್ಟು ವಿಧಾನಸಭೆ ಅಥವಾ ವಿಧಾನಪರಿಷತ್ತಿನ ಗ್ರಾಮಾಂತರ ಪ್ರದೇಶದ ಸದಸ್ಯರು ವಿಧಾನ ಸಭೆ ಅಥವಾ ವಿಧಾನ ಪರಿಷತ್ತು ಅಥವಾ ಅದರ ಯಾವುದೇ ಸಮಿತಿಯ ಸಭೆಯು ಪ್ರಾರಂಭಗೊಳ್ಳುವುದಕ್ಕೆ ಮುಂಚಿತವಾಗಿ ಅಥವಾ ಸಭೆಯು ಮುಕ್ತಾಯಗೊಳ್ಳುವಾಗ ಅದೇ ಅವಧಿಯಲ್ಲಿ ಇತರ ಯಾವುದೇ ಸಮಿತಿಯ ಸಭೆಗೆ ಹಾಜರಾಗುವುದು ಅಗತ್ಯವಾದರೆ ಅವರು ಮೂರು ಅಥವಾ ಅದಕ್ಕಿಂತ ಕಡಿಮೆ ದಿನಗಳ ಅವಧಿಗೆ ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೂ ವಿಧಾನಸಭೆ ಅಥವಾ ವಿಧಾನಪರಿಷತ್ತಿನ ಯಾವುದೇ ಸದಸ್ಯರು ತಮ್ಮ ಸಾಮಾನ್ಯ ವಾಸಸ್ಥಳಕ್ಕೆ ವಾಪಸ್ಸಾಗಿದ್ದರೆ ತಾವು ಪ್ರವಾಸದ ಪ್ರಯಾಣ ಭತ್ಯೆಯನ್ನು ಪಡೆಯಲು ಮಾತ್ರವೆ ಅರ್ಹರಾಗಿರುತ್ತಾರೆ. ಪರಂತು ವಿಧಾನ ಸಭೆಯ ಅಥವಾ ವಿಧಾನಪರಿಷತ್ತಿನ ಅಥವಾ ಅದರ ಯಾವುದೇ ಸಮಿತಿಯ ಸಭೆಗಳ ಹೊರತು ಇತರ ಸಮಿತಿಗಳು ಸಭೆ ಸೇರುವ ನಡೆಯುವ ಸ್ಥಳದಲ್ಲಿ ಅವನು ಉಳಿದುಕೊಂಡಿದ್ದರೆ ಸರ್ಕಾರದಿಂದ ರಚಿತವಾದ ಸಮಿತಿಗಳಿಗೆ ನಿಗಧಿಪಡಿಸಿದ ದರದಲ್ಲಿ ಅವನು ಉಳಿದುಕೊಂಡಿದ್ದರೆ ಸರ್ಕಾರದಿಂದ ರಚಿತವಾದ ಸಮಿತಿಗಳಿಗೆ ನಿಗಧಿಪಡಿಸಿದ ದರದಲ್ಲಿ ಅವನಿಗೆ ಎಷ್ಟು ಮೊತ್ತದ ದಿನಭತ್ಯೆ ದೊರೆಯುತ್ತಿತ್ತೋ ಅದಕ್ಕಿಂತ ಹೆಚ್ಚು ಪ್ರಯಾಣಭತ್ಯೆ ಅವನಿಗೆ ದೊರೆಯತಕ್ಕದ್ದಲ್ಲ.

(3) ಆದಾಗ್ಯೂ ಅಂಥ ಸದಸ್ಯರು ವಿಧಾನ ಮಂಡಲ ಅಥವಾ ಅದರ ಸಮಿತಿಯ ಸಭೆ ಮುಗಿದ ಮೂರು ದಿನಗಳೊಳಗೆ ಸರ್ಕಾರ ರಚಿಸಿದ ಸಮಿತಿಯ ಸಭೆಯ ಅರಿವಿಲ್ಲದೆ ತಮ್ಮ ಸಾಮಾನ್ಯ ವಾಸಸ್ಥಾನಕ್ಕೆ ವಾಪಸ್ಸಾಗಿದ್ದರೆ ಅವರು ಅಂತಹ ಭತ್ಯದ ನಿರ್ಬಂಧಕ್ಕೊಳಪಡದ ಸಾಮಾನ್ಯ ಪ್ರಯಾಣ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

11. ಆಯೋಗಗಳು ಮತ್ತು ಸಮಿತಿಗಳ ಅಧಿಕಾರೇತರ ಸದಸ್ಯರ ಪ್ರಯಾಣ ಭತ್ಯೆ ಕ್ಲೇಮುಗಳಿಗೆ ಸಂಬಂಧಿಸಿದ ಪ್ರಕ್ರಿಯಾ ನಿಯಮಗಳು : (1) ಪ್ರತಿಯೊಂದು ಅಧಿವೇಶನ ಮುಕ್ತಾಯಗೊಂಡಾಗ ವಿಧಾನಸಭೆ ಮತ್ತು ವಿಧಾನಪರಿಷತ್ತಿನ ಸದಸ್ಯರಿಗೆ ನಗದು ಪ್ರಯಾಣ ಭತ್ಯೆ ನೀಡುವ ಮತ್ತು ವಿಶ್ವವಿದ್ಯಾಲಯವು ತನಗೆ ಸಂಬಂಧಿಸಿದ ಸಭೆಗಳಲ್ಲಿ ಭಾಗವಹಿಸಿದ ಹಾಜರಾತಿಗೆ ಪ್ರಯಾಣ ಭತ್ಯೆ ನೀಡುವುದಕ್ಕೆ ಸಂಬಂಧಪಟ್ಟ ಚಾಲ್ತಿಯಲ್ಲಿರುವ ಕಾರ್ಯವಿಧಾನವು ಯಾವುದೇ ಬದಲಾವಣೆಯಿಲ್ಲದೆ ಮುಂದುವರಿಯುತ್ತದೆ. ಸರ್ಕಾರ ರಚಿಸಿದ ಸಮಿತಿಗಳ ಸದಸ್ಯರಾಗಿ ಕಾರ್ಯ ನಿರ್ವಹಿಸುತ್ತಿರುವ ವಿಧಾನಸಭೆ ಮತ್ತು ವಿಧಾನಪರಿಷತ್ತಿನ ಸದಸ್ಯರ ಪ್ರಯಾಣ ಭತ್ಯೆ ಬಿಲ್ಲುಗಳನ್ನು ಸಂಬಂಧಪಟ್ಟ ಸಮಿತಿಯ ಕಾರ್ಯದರ್ಶಿಯವರು ಮೇಲು ರುಜು ಮಾಡಿ ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಅಥವಾ ಪರಿಷತ್ತು ಇವರಿಗೆ ಕಳುಹಿಸುತ್ತಾರೆ. ನಂತರ ಇವರು ಸಂದಾಯಗಳ ಉಲ್ಲೇಖದೊಂದಿಗೆ ಪರಿಶೋಧಿಸಿ, ಸಂಬಂಧಪಟ್ಟ ಸಮಿತಿಯ ಕಾರ್ಯದರ್ಶಿಗೆ ಮಾಹಿತಿಯನ್ನು ನೀಡುವುದರೊಂದಿಗೆ ಹಣವನ್ನು ಸಂದಾಯ ಮಾಡಲು ಖಜಾನೆಗೆ ಬಿಲ್ಲನ್ನು ಕಳುಹಿಸುತ್ತಾರೆ.

(2) ಮೇಲಿನ ಖಂಡ (1) ರಲ್ಲಿ ಉಲ್ಲೇಖಿಸಿದವುಗಳನ್ನು ಉಳಿದು ಇತರ ಸಂಸ್ಥೆಗಳ ಸಭೆಗಳಿಗೆ ಸಂಬಂಧಿಸಿದಂತೆ ಆಯೋಗಗಳ ಮತ್ತು ಸಮಿತಿಗಳ ಕಾರ್ಯದರ್ಶಿಗಳು, ಕರ್ನಾಟಕ ಸಿವಿಲ್ ಸೇವಾ ನಿಯಮಗಳ ಭಾಗ VIII ರಲ್ಲಿ ಸೂಚಿಸಿರುವಂಥ ಇತರ ಪ್ರಮಾಣ ಪತ್ರಗಳೊಂದಿಗೆ ಈ ಮುಂದಿನ ಪ್ರಮಾಣ ಪತ್ರಗಳನ್ನು ಸದಸ್ಯರಿಂದ ಪಡೆದುಕೊಳ್ಳತಕ್ಕದ್ದು :–

" ______________ ಸಮಿತಿಯ ಸದಸ್ಯ ______________ ಆದ ನಾನು ಯಾವ ಪ್ರಯಾಣಕ್ಕಾಗಿ ಪ್ರಯಾಣಭತ್ಯೆಯನ್ನು ಕೋರಿರುವೆನೋ ಆ ಸ್ಥಳಕ್ಕೆ ವಾಸ್ತವವಾಗಿ, ಆ ಪ್ರಯಾಣವನ್ನು ಮಾಡಿದ್ದೇನೆಂದು ಮತ್ತು ಅದೇ ದಿನಕ್ಕೆ ಅದೇ ಪ್ರಯಾಣಕ್ಕೆ ಪ್ರಯಾಣಭತ್ಯೆ ಅಥವಾ ದಿನಭತ್ಯೆ ಅಥವಾ ಉಪಸ್ಥಿತಿ ಭತ್ಯೆಯನ್ನಾಗಲಿ ಬೇರೆ ಯಾವುದೇ ರೀತಿಯಲ್ಲಿ ಕ್ಲೇಮು ಮಾಡಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ."

(3) ಸದಸ್ಯರುಗಳು, ತಮ್ಮ ಪ್ರಯಾಣ ಭತ್ಯದ ಬಿಲ್ಲುಗಳಲ್ಲಿ ದಾಖಲು ಮಾಡಲು ಅಗತ್ಯವಾಗಿರುವ ಮೇಲಿನ ಪ್ರಮಾಣ ಪತ್ರದೊಂದಿಗೆ ಈ ಮುಂದಿನ ಘೋಷಣಾ ಪ್ರಪತ್ರದಲ್ಲಿ ಸಭೆ ನಡೆದ ಅದೇ ದಿನ/ದಿನಗಳು ಅಥವಾ ಸಭೆಯ ಮುಂಚೆ ಮತ್ತು ಅನಂತರದ 3 ದಿವಸಗಳ ಅವಧಿಯಲ್ಲಿ ಸಭೆಗೆ ಹಾಜರಾಗಿದ್ದರೆ ಅವರು ಆಗಮಿಸಿದ ಮತ್ತು ನಿರ್ಗಮಿಸಿದ ದಿನಾಂಕ ಮತ್ತು ಸಮಯದ ವಿವರಗಳು, ಪ್ರಯಾಣ ಮತ್ತು ಇತರ ಸಭೆಗಳಿಗೆ ಉಪಯೋಗಿಸಲಾದ ಸಾರಿಗೆ ವಿಧಾನದ ವಿವರಗಳನ್ನು ಸಹ ಒದಗಿಸತಕ್ಕದ್ದು :–

**ಘೋಷಣೆ**

1. ಸದಸ್ಯರ ಹೆಸರು
2. ಖಾಯಂ ನಿವಾಸ ಸ್ಥಳ
3. ಸಭೆ ನಡೆದ ಸ್ಥಳಕ್ಕೆ ಆಗಮಿಸಿದ ದಿನಾಂಕ ಮತ್ತು ಸಮಯ
4. ಪ್ರಯಾಣ ಮಾಡಿದ ವಿವರಗಳು
   i. ಇಡೀ ಪ್ರವಾಸವನ್ನು ರಸ್ತೆ ಮಾರ್ಗವಾಗಿ ಮಾಡಲಾಯಿತೇ
   ii. ರಸ್ತೆ ಪ್ರಯಾಣದಲ್ಲಿ ಉಪಯೋಗಿಸಲಾದ ಸಾರಿಗೆ ವಿಧಾನ
   iii. ರೈಲು ಪ್ರಯಾಣವಾದರೆ ಯಾವ ದರ್ಜೆಯಲ್ಲಿ ಪ್ರಯಾಣ ಮಾಡಲಾಗಿದೆ
5. ಸದಸ್ಯರು, ಸಮಿತಿ ಸಭೆಗೆ ಹಾಜರಾದ ದಿನಗಳ ಸಂಖ್ಯೆ
6. ಸಭೆ ನಡೆದ ಸ್ಥಳದಿಂದ ನಿರ್ಗಮಿಸಿದ ದಿನಾಂಕ ಮತ್ತು ಸಮಯ
7. ಅದೇ ದಿನ : ದಿನಗಳು ಅಥವಾ ಮೇಲಿನ ಕ್ರಮ ಸಂಖ್ಯೆ 5ರ ಎದುರಿನಲ್ಲಿ ಸೂಚಿಸಲಾದ ದಿನ : ದಿನಗಳಿಗೆ ಮೂರು ದಿನಗಳು ಮುಂಚಿತವಾಗಿ ಮತ್ತು ಅನಂತರದ ಅವಧಿಯಲ್ಲಿ ಇತರ ಸಭೆಗೆ ಹಾಜರಾಗಿದ್ದರೆ ಅದರ ಹೆಸರು
8. ಹಣ ಸಂದಾಯವನ್ನು ಅಪೇಕ್ಷಿಸಿದ ಖಜಾನೆಯ ಹೆಸರು

ಈ ಸಭೆಗೆ ಸಂಬಂಧಿಸಿದ ಪ್ರಯಾಣಭತ್ಯೆ ಮತ್ತು ದಿನಭತ್ಯೆಯ ಯಾವುದೇ ಮೊಬಲಗು ಲೆಕ್ಕ ಪರಿಶೋಧನೆಯ ನಿಯಮಗಳಿಗನುಸಾರ ಲಭ್ಯವಲ್ಲವೆಂದಾದರೆ ಅದನ್ನು ಹಿಂದಿರುಗಿಸಲು ನಾನು ಬದ್ಧನಾಗಿದ್ದೇನೆ.

ಸಹಿ

ದಿನಾಂಕ : ಸಮಿತಿಯ ಸದಸ್ಯರ ಪರವಾಗಿ

(4) ಈ ಕೆಳಕಂಡ ನಮೂನೆಯಲ್ಲಿ ಹಾಜರಾತಿಯ ಪ್ರಮಾಣ ಪತ್ರವನ್ನು ಸದಸ್ಯರುಗಳ ಪ್ರಯಾಣ ಭತ್ಯೆಯ ಬಿಲ್‌ನಲ್ಲಿ, ಸಮಿತಿಯ ಕಾರ್ಯದರ್ಶಿಯವರು ದಾಖಲು ಮಾಡತಕ್ಕದ್ದು :–

"______________________ ದಿನಾಂಕದ ______________________ ಸಂಖ್ಯೆಯ ಸರ್ಕಾರಿ ಆದೇಶದಲ್ಲಿ ರಚಿತವಾದ ______________________ ಸದಸ್ಯರಾಗಿ ______________________ ರಲ್ಲಿ ______________________ ನೆಯ ದಿನಾಂಕದಂದು ನಡೆದ ಸಭೆಗೆ ಶ್ರೀ/ಶ್ರೀಮತಿ ಇವರು ಹಾಜರಾಗಿದ್ದರೆಂದು ಪ್ರಮಾಣೀಕರಿಸಲಾಗಿದೆ."

ಕಾರ್ಯದರ್ಶಿ

(5) ಅಗತ್ಯ ಪ್ರಮಾಣಪತ್ರಗಳೊಂದಿಗೆ, ಪ್ರತಿಯೊಬ್ಬ ಸದಸ್ಯರು ತಯಾರಿಸಿದ ಸಹಿ ಮಾಡಿದ ಪ್ರಯಾಣಭತ್ಯೆಯ ಬಿಲ್ಲುಗಳನ್ನು ಸಮಿತಿಯ ಕಾರ್ಯದರ್ಶಿಯವರಿಗೆ ಕಳುಹಿಸಲಾಗುವುದು. ನಂತರ ಅವರು ನಿಯಮಗಳ ಪ್ರಕಾರ ಬಿಲ್ಲಿನ ಕ್ಲೇಮುಗಳನ್ನು ಪರಿಶೀಲಿಸಿ ತಮ್ಮ ಮೇಲು ರುಜುವಿನೊಂದಿಗೆ ಬಿಲ್ಲನ್ನು ಸಂದರ್ಭಾನುಸಾರ ವಿಧಾನ ಮಂಡಲದ ಸದಸ್ಯರ ಕ್ಲೇಮುಗಳ ಸಂಬಂಧದಲ್ಲಿ ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಅಥವಾ ವಿಧಾನಪರಿಷತ್ತು ಇವರಿಗೆ ಮತ್ತು ಇತರರ ಸಂಬಂಧದಲ್ಲಿ ಖಜಾನೆ ಅಧಿಕಾರಿಯವರಿಗೆ ಕಳುಹಿಸುವುದು.

(6) ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಅಥವಾ ವಿಧಾನ ಪರಿಷತ್ತು ಇವರು ಮಾಹಿತಿ ಚೀಟಿಯ ಪ್ರತಿಯನ್ನು ಸಂದರ್ಭಾನುಸಾರ ಅನುಮೋದಿಸಲಾದ ಪ್ರಯಾಣಭತ್ಯೆಯ ಬಿಲ್ಲುಗಳ ವಿವರಗಳನ್ನು ಟಿಪ್ಪಣಿ ಮಾಡಲು ಸಮಿತಿಯ ಕಾರ್ಯದರ್ಶಿಯವರಿಗೆ ಕಳುಹಿಸುವರು. ನಂತರ ಅದನ್ನು ಸದಸ್ಯರಿಗೆ ಕಳುಹಿಸಲಾಗುವುದು ಮತ್ತು ಪ್ರಯಾಣಭತ್ಯೆಯ ಬಿಲ್ಲಿನೊಂದಿಗೆ ಮತ್ತೊಂದು ಪ್ರತಿಯನ್ನು ಸದಸ್ಯರಿಗೆ ನೇರವಾಗಿ ಸಂದಾಯ ಮಾಡಲು ಖಜಾನೆ ಅಧಿಕಾರಿಗೆ ಕಳುಹಿಸಲಾಗುವುದು. ವಿಧಾನಮಂಡಲದ ಸದಸ್ಯರಲ್ಲದೆ ಇತರ ಸದಸ್ಯರುಗಳ ಸಂಬಂಧದಲ್ಲಿ ಸಮಿತಿಯ ಕಾರ್ಯದರ್ಶಿಯವರು ಸಂಬಂಧಪಟ್ಟ ಸದಸ್ಯರಿಗೆ ಹಣವನ್ನು ಸಂದಾಯ ಮಾಡಲು ಖಜಾನೆಗೆ ಕಾರ್ಯದರ್ಶಿಯವರ ಸಂಬಂಧಪಟ್ಟ ಸದಸ್ಯರಿಗೆ ಹಣವನ್ನು ಸಂದಾಯ ಮಾಡಲು ಖಜಾನೆಗೆ ಬಿಲ್ಲನ್ನು ಕಳುಹಿಸಿರುವ ಬಗ್ಗೆ ಮಾಹಿತಿಯನ್ನು ಕಳುಹಿಸುವರು.

(7) ಲೆಕ್ಕ ಪರಿಶೋಧನೆಯಲ್ಲಿ ಪ್ರಸ್ತಾಪಿಸಿದ ಆಕ್ಷೇಪಣೆಗಳನ್ನು ಕರ್ನಾಟಕ ಮಹಾಲೇಖಪಾಲರು ಸಮಿತಿಯ ಕಾರ್ಯದರ್ಶಿಯವರಿಗೆ, ಅಗತ್ಯ ಮಾಹಿತಿಗಳನ್ನು ಒದಗಿಸುವಂತೆ ತಿಳಿಸುತ್ತಾರೆ.

(8) ಗೊತ್ತುಪಡಿಸಿದ ನಿಯಮಗಳಿಗನುಸಾರ ಮೈಲುದರ, ದಿನಭತ್ಯೆ, ರೈಲು ಪ್ರಯಾಣಭತ್ಯೆ ಮತ್ತು ಒಂದು ನಿರ್ದಿಷ್ಟ ಸಮಿತಿಯ ವೆಚ್ಚಕ್ಕಾಗಿ ಸರ್ಕಾರದವರು ಒದಗಿಸಿರುವ ಹಣ ಇವುಗಳಿಗನುಸಾರ ಬಿಲ್ಲುಗಳನ್ನು ಸರಿಯಾಗಿ ತಯಾರಿಸಲಾಗಿದೆಯೆಂಬುದನ್ನು ಖಚಿತಪಡಿಸುವುದಕ್ಕಾಗಿ ಮಾತ್ರವೇ ಕಾರ್ಯದರ್ಶಿಗಳ ಮೇಲುರುಜು ಹಾಕಬೇಕಾಗಿದೆ.

(9) ಕೆಲವು ಪ್ರಕರಣಗಳಲ್ಲಿ ಅಧಿಕಾರೇತರ ಸದಸ್ಯರು ಸಭೆ ನಡೆಯುವ ಸ್ಥಳಕ್ಕೆ ಹೋದರೂ ಸಹ ಕೋರಂ ಇಲ್ಲದೆ ಸಭೆಯನ್ನು ಮುಂದೂಡಿದ ಕಾರಣ ಅಂದು ಸಭೆಗೆ ಹಾಜರಾಗಲು ಸಾಧ್ಯವಾಗದಿದ್ದರೂ ಆಗ ಅವರಿಗೆ ನಿಯಮಗಳ ಮೇರೆಗೆ, ಗ್ರಾಹ್ಯವಾಗುವ ಪ್ರಯಾಣಭತ್ಯೆ ಮತ್ತು ದಿನಭತ್ಯೆಯನ್ನು ನೀಡಬಹುದು. ಅಂತಹ ಪ್ರಕರಣಗಳಲ್ಲಿ ಕಾರ್ಯದರ್ಶಿಯವರು, ಈ ಮುಂದಿನ ಪ್ರಮಾಣಪತ್ರವನ್ನು ಬಿಲ್ಲಿನಲ್ಲಿ ದಾಖಲು ಮಾಡತಕ್ಕದ್ದು.

"ಶ್ರೀ/ಶ್ರೀಮತಿ ______________________ ಇವರು ______________________ ದಲ್ಲಿ ______________________ ದಿನಾಂಕದಂದು ______________________ 3 ಸಮಿತಿಯ ಸಭೆಯ ಸ್ಥಳದಲ್ಲಿ ಹಾಜರಾಗಿದ್ದರು, ಆದರೆ ಕೋರಂ ಇಲ್ಲದೆ ಆ ದಿನಾಂಕದಂದು ಸಭೆಯು ನಡೆಯಲಿಲ್ಲ ಎಂದು ಪ್ರಮಾಣಿಕರಿಸಲಾಗಿದೆ."

(10) ಕ್ಲೇಮುಗಳ ಸಲ್ಲಿಕೆಯಲ್ಲಿ ವಿಳಂಬವಾದರೆ ಅಂಥ ವಿಳಂಬ ಮನ್ನಾ ಮಾಡುವ ಮಂಜೂರಾತಿಯನ್ನು (i) ಆರು ತಿಂಗಳ ಅವಧಿಗಿಂತ ಹೆಚ್ಚಾದ ಪ್ರಕರಣಕ್ಕೆ ಇಲಾಖೆಯ ಮುಖ್ಯಸ್ಥರಿಂದಲೂ ಹಾಗೂ (ii) ಮೂರು ವರ್ಷಗಳ ಅವಧಿಗಿಂತ ಹೆಚ್ಚಾದ ಪ್ರಕರಣಕ್ಕೆ ಕರ್ನಾಟಕ ಸರ್ಕಾರದಿಂದಲೂ ಪಡೆಯುವ ಅಗತ್ಯವಿದೆ. ಈ ಕ್ಲೇಮುಗಳಿಗೆ ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇದ 21ರ ಪ್ರಕಾರ ಮಹಾಲೇಖಪಾಲರು, ಕರ್ನಾಟಕ ಇವರಿಂದ, ಪೂರ್ವ ಲೆಕ್ಕ ಪರಿಶೋಧನೆಯ ಅಗತ್ಯವಿದೆ.

(11) ಸರ್ಕಾರವು ಕಾರ್ಯದರ್ಶಿಗಳನ್ನು ನೇಮಕ ಮಾಡದಿರುವಂಥ ಸಮಿತಿಗಳ ಅಥವಾ ಸಮ್ಮೇಳನಗಳಿಗೆ ಸಂಬಂಧಿಸಿದಂತೆ ಸರ್ಕಾರೇತರ ಸದಸ್ಯರ ಪ್ರಯಾಣಭತ್ಯೆಯ ಬಿಲ್ಲುಗಳಿಗೆ ಮೇಲು ರುಜು ಮಾಡುವ ಅಧಿಕಾರವನ್ನು ಈ ಸಂಬಂಧದಲ್ಲಿ ಸರ್ಕಾರದಿಂದ ಅಧಿಕೃತವಾಗಿ ನೇಮಕಗೊಂಡ ಸರ್ಕಾರಿ ನೌಕರನು ಚಲಾಯಿಸತಕ್ಕದ್ದು.

(12) ಒಂದು ಸಮಿತಿ, ಆಯೋಗ ಅಥವಾ ವಿಚಾರಣಾ ಮಂಡಳಿಗೆ ನಿಯೋಜಿತನಾದಾಗ, ವಿಧಾನ ಮಂಡಲದ ಅಧಿಕಾರೇತರ ಸದಸ್ಯನಿಗೆ ರಾಜ್ಯ ಸರ್ಕಾರದ ಅಥವಾ ಸರ್ಕಾರದವರು ಹಣ ತೊಡಗಿಸಿರುವ ಅಥವಾ ಸರ್ಕಾರಕ್ಕೆ ಯಾವುದೇ ಇತರ ಹಿತಾಸಕ್ತಿ ಇರುವ ಸ್ವಾಯತ್ತ ಔದ್ಯಮಿಕ ಅಥವಾ ವಾಣಿಜ್ಯ ಉದ್ಯಮದ ಅಥವಾ ನಿಗಮದ ಅಥವಾ ಶಾಸನಬದ್ಧ ನಿಕಾಯದ ಅಥವಾ ಸ್ಥಳೀಯ ಪ್ರಾಧಿಕಾರದ ವೆಚ್ಚದಲ್ಲಿ ಉಚಿತ ಭೋಜನ ಮತ್ತು ವಸತಿ ಸೌಕರ್ಯ ಲಭ್ಯವಾದಲ್ಲಿ ಮೇಲೆ ಹೇಳಿದ ಅಧಿಸೂಚನೆಯ ಮೇರೆಗೆ ಅವನಿಗೆ ಲಭ್ಯವಾಗುವ ದಿನಭತ್ಯೆಯ ನಾಲ್ಕನೇ ಒಂದರಷ್ಟು ದಿನಭತ್ಯೆಯನ್ನು ಮಾತ್ರ ಕೊಡತಕ್ಕದ್ದು. ಭೋಜನ ಅಥವಾ ವಸತಿ ಸೌಕರ್ಯಗಳಲ್ಲಿ ಯಾವುದಾದರೂ ಒಂದನ್ನು ಮಾತ್ರ ಉಚಿತವಾಗಿ ಒದಗಿಸಿರುವಲ್ಲಿ ಲಭ್ಯವಾಗುವ ದಿನಭತ್ಯೆಯ ಅರ್ಧದಷ್ಟು ದಿನಭತ್ಯೆ ಕೊಡತಕ್ಕದ್ದು.

12. ರಾಜ್ಯ ಸರ್ಕಾರವು, ಒಂದು ಸಮಿತಿ ಅಥವಾ ಆಯೋಗವನ್ನು ನೇಮಕ ಮಾಡಿ ಅದರಲ್ಲಿ ಕೇಂದ್ರ ಅಥವಾ ರಾಜ್ಯ ಸರ್ಕಾರದ ವಾಣಿಜ್ಯ ಕೈಗಾರಿಕಾ ಉದ್ಯಮದ ಅಥವಾ ಕೇಂದ್ರ ಅಥವಾ ರಾಜ್ಯ ಸರ್ಕಾರದಿಂದ ನಿಯಂತ್ರಿಸಲ್ಪಟ್ಟ ಅಥವಾ ಹಣ ಒದಗಿಸಲ್ಪಟ್ಟ ಶಾಸನಬದ್ಧ ನಿಕಾಯಗಳ ಅಧಿಕಾರಿಗಳು ಅಥವಾ ನೌಕರರನ್ನು ಸದಸ್ಯರನ್ನಾಗಿ ನೇಮಕ ಮಾಡಿದಾಗ ಅಥವಾ ಅಂತಹ ಸಮಿತಿಗಳ ಸಭೆಗಳಲ್ಲಿ ಅವರು ಹಾಜರಾಗಬೇಕಾದಾಗ ಮಾತ್ರ ಸರ್ಕಾರದ ಅಥವಾ ನಿಕಾಯದಲ್ಲಿ ಜಾರಿಯಲ್ಲಿರುವ ನಿಯಮಗಳಿಗನುಸಾರ ಈ ಸಂಬಂಧದಲ್ಲಿ ಭರಿಸಿದ ಅವರ ಪ್ರಯಾಣ ಭತ್ಯ ಅಥವಾ ದಿನಭತ್ಯೆಯನ್ನು ಯಾವುದೇ ನಿರ್ದಿಷ್ಟ ಪ್ರಕರಣಗಳಲ್ಲಿ ಬೇರೆ ರೀತಿಯಲ್ಲಿ ತೀರ್ಮಾನಿಸಿದ ಹೊರತು ಸರ್ಕಾರದಿಂದ ಅಥವಾ ಸಂಬಂಧಪಟ್ಟ ನಿಕಾಯದಿಂದಲೇ ಭರಿಸತಕ್ಕದ್ದು.

13. ಈ ನಿಯಮಗಳಿಗೆ ಒಳಪಟ್ಟ ವ್ಯಕ್ತಿಗಳಿಗೆ ಅನ್ವಯವಾಗುವ ಈ ನಿಯಮಗಳು ಆರಂಭವಾಗುವ ದಿನಾಂಕಕ್ಕಿಂತ ನಿಕಟಪೂರ್ವದಲ್ಲಿ ಜಾರಿಯಲ್ಲಿದ್ದ ಪ್ರಯಾಣಭತ್ಯೆಯ ಸಂದಾಯವನ್ನು ವಿನಿಯಮಿಸುವ ನಿಯಮಗಳನ್ನು ಈ ನಿಯಮಗಳು ಆರಂಭವಾಗುವ ದಿನಾಂಕಕ್ಕಿಂತ ಮುಂಚೆ ಮಾಡಿದ ಪ್ರಯಾಣ ಮತ್ತು ವಾಸ್ತವ್ಯಕ್ಕೆ ಸಂಬಂಧಿಸಿದಂತೆ ಪ್ರಯಾಣ ಭತ್ಯೆ ಸಂದಾಯಕ್ಕೆ ಅನ್ವಯವಾಗುವ ಹೊರತು ನಿರಸನಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ. (ಸೇವೆಗಳು–1)

## FINANCE SECRETARIAT

### NOTIFICATION

### No.FD 3 SRA 2015, BENGALURU, DATED:03.08.2015

In supersession of Notification No. FD 2 SRA 2000, dated 3-2-2001, the Government of Karnataka hereby makes the following rules, on the subject relating to the payment of Travelling Allowance to non-official Members of Committees, Commissions and other bodies constituted under the authority of or by Government namely:-

1. These rules may be called Payment of Travelling Allowance (to non-official Members of Committees, Commissions or other bodies) Rules, 2015.

2.They shall come into force at once.

3.The Travelling Allowance of Non-official Members (including Members of the State Legislature and retired officers of Government) who,

(i) are Members of Committees, Commission or other bodies constituted by the State Government; or

(ii) are deputed by the Government to places either within or outside the State or Country to attend meetings of the Committees, Commissions or other bodies constituted by an authority other than the State Government; or

(iii) are deputed by the Government on special work in connection with the affairs of the State is regulated as follows:-

(A) Journeys within or outside the State.

**(1) RAILWAY FARE:-**

Between places connected by railway, he shall be eligible to draw first class railway fare or railway fare actually paid, by the shortest route, whichever is less, including reservation charges but excluding agency charges paid to a travelling agent. Where a rail journey is cancelled be a non-official member due to the postponement of the meetings he may prefer to the appropriate Railway authority his, claim for refund of cancellation charges (excluding reservation charges) on unreserved railway tickets. The claim should be accompanied by a certificate from the competent authority to countersign his T .A. Bills stating that the journey had to be cancelled due to the postponement of the meeting.

**(2) BUS FARE:-**

(a) Between places not connected by railway, he shall be eligible to draw bus fare by the shortest route, including reservation charges but not agency charges paid to a travel agent.

(b) Between places partly connected by railway and partly by road, he may travel by bus by shortest route and claim bus fare including reservation charges but not agency charges paid to a travel agent.

**(3) MILEAGE ALLOWANCE:-**

He shall be eligible to draw mileage allowance from residence to railway station or bus station and vice versa and from railway station or bus station to the place of meeting and vice versa, at the following rates:-

(a) When journey is performed by

| Motor Cycle / Scooter Tanga/Cycle Rickshaw / Mandriven Rickshaw | Full Taxi/Own Car | Auto Rickshaw |
|---|---|---|
| **Rs. 2.00 per.k.m.** | **The rate per k.m. for AC Taxi fixed by the Transport Commissioner** | **The minimum rate and the rate per k.m. fixed by the Transport Commissioner** |

(b) Where a Member attends a meeting of the Committee at the place at which he is normally residing, no mileage allowance shall be payable.

(4) **Journey by Sea:-**

**In** respect of journey by sea or by river steamer, a Member will be entitled to one fare at the lowest rate (exclusive of diet) of the highest class of accommodation.

(5) **Air Journeys:-**

(i) Journey by air require the specific sanction of Government which will be accorded only in cases of extreme emergency necessitating a journey.

(ii) Return tickets at reduced rates, if available should be purchased when the return journey is expected to be performed within the period during which the return ticket is valid. Mileage allowance for the forward and return journey when such return tickets are available will, however be the actual cost of such return ticket.

(iii) Road mileage at the rates specified above from the point from which the journey is held to commence to the booking Offices of the Air Transport Companies the point in any station from which journey is to be held to commence or at which it is to be held to end shall be the Chief Public Office or any other point which may be fixed by the Government for the said purpose. In Bengaluru and Mysuru cities the public offices and in other places, travellers bungalow or inspection lodge from which distances are reckoned in the road map issued by the Karnataka Public Works Department will be regarded as the point fixed by the Government for the purpose.

(iv) Travel by air means journeys performed in the machines of Public Air Transport Companies regularly plying for hire. It does not includes journey performed in private Aeroplane or Air Taxis.

(v) Insurance for air travel will be met by Government, claims for insurance premium for air journeys should invariably be supported by the receipts on policies issued by the insurance companies.

(vi) **Outside India:-** At such rates as may prescribed by Government from time to time in individual cases.

(6) Non-official Members of the Committee etc., may, at their option, be allowed to draw Daily Allowance at the rates applicable to the Government Servants belonging to group A in lieu of the sitting fee.

**(7) SITTING FEES:-**

He shall be eligible to draw sitting fees per day of sitting, at the following rates:-

(a) Place of sitting within the State.

(i) Bengaluru Rs.500/- (Five hundred rupees)

(ii) Other cities with Municipal Corporation Rs.350/(Three hundred and fifty rupees)

(iii) Other places Rs.250/- (Two hundred and fifty rupees)

(b) Place of sitting outside the State:-

(i) Ahmedabad, Mumbai, Kolkata, Delhi, Gaziabad, Kanpur, Hyderabad, Lucknow, Chennai, Mussoorie, Nagpur, Pune, Simla, Srinagar, Goa, Diu and Daman Rs.I000/- (One thousand rupees).

(ii) Other Places Rs.750/- (Seven hundred and fifty rupees).

4. Government may, in special circumstances grant specific rates of Conveyance Allowance or actual charges incurred on hire of conveyance or other charges in addition to the Travelling Allowance.

5. Payment of lumpsum advance to cover travelling expenses, may be authorized by Government subject to adjustment from the final travelling allowance bills. The advances should not ordinarily exceed three-fourths of the amount of allowance admissible. This limit may, in special cases be enhanced under specific orders of Government.

6. An officer who may be a Member or Secretary of the Committee or other officer of the Government will be responsible for the drawal disbursement and final adjustment of the advances paid to the non-official Members of the Committees. Before allowing such advances, a written undertaking from each non-official Member should be obtained in the following Form. A second advance should not be allowed until the first advances is adjusted.

**FORM**

I……………………………………… Member of the Committee/Commission appointed by the Government of Karnataka having received a sum of Rs ………………….. (Rupees in words) as advance from the Government of Karnataka for performing certain journeys connected with my duties as Member of the above said Committee/Commission hereby agree that the amount shall be adjusted against my Travelling Allowance bill immediately after the completion of specified journeys and that I shall forthwith refund to the Government of Karnataka any portion of the advance not so adjusted. If for any reason, the specified journeys are not performed, I hereby agree to refund forthwith to the Government of Karnataka the entire sum of the advance on demand.

Revenue Stamp

Signature of Member

7. Subject to such modifications as are specified above, the rule regulating the "payment of Travelling Allowance to officers of Government shall be the rules applicable to the payment to Travelling Allowance to non-official also, except where the requirement of specific rule is dispensed with by a special order of Government. Sitting fee, Daily Allowance or Halting Allowance whatever term is allowed in the Government Order constituting the Committee is admissible on the days of meeting in addition to Travelling Allowance admissible for the journeys irrespective of the time of arrival or departure at the place of meeting.

8. Government may sanction special rates in individual cases, if the circumstance justify.

9. **Road Mileage:-**

(1) When a non-official Member makes a journey by bus for thirty-two kilometers or more, he will be allowed 1½ bus fare plus Daily Allowance limited to road mileage. When a non-official Member makes a journey by bus for less than thirty two kilometers he will be allowed 1½ bus fare limited to road mileage.

(2) A non-official Member including a retired officer of the Committees who is entitled to Railway fare higher than the second class, will record in his Travelling Allowance Bill, a certificate of having travelled in the class for which Railway fare is claimed therein. Otherwise, the officer will be paid only Railway fare based on the fare of the class in which he actually travelled.

(3) Attendence of Standing Committees, Sub-Committees, Select Committees, Special Committees, etc., of the several bodies will be treated as meeting of the bodies themselves for the purpose of these rules.

(4) Non-official Members will be entitled to draw Travelling Allowance calculated from and to their ordinary place of residence and from the place of meeting. Daily Allowance for halts by Members to attend an adjourned Meeting or another Meeting at the .place may be allowed subject to the following conditions:-

(a) The total daily allowance for such halts is limited to the amount of Travelling Allowance admissible for returning to his place of residence and coming back to attend an adjourned meeting or another meeting.

(b) Travelling Allowances for the to and fro journey is allowed only once counting the two meetings as one for the purpose; and

(c) The Daily Allowance is debited to the head of account pertaining to the Meeting.

(5) When a Sunday or other holiday intervenes between. two consecutive sittings, halting allowance for such days will be allowed; provided the Member stays at the place of meeting on the Sunday or Holiday intervening two meetings.

10. (1) Members of the State Legislature will not be entitled to draw Travelling or Daily Allowance for attending meetings of Committees constituted by Government viz., Committees other than those of the Legislative Assembly or Legislative Council or any Committee of the said Assembly or Council under the Karnataka Legislature Salaries, Pensions and Allowances Act, 1966 for the days on which they draw Travelling Allowance or Daily Allowance for attending the meetings of the Legislative Assembly or Legislature Councilor or of any Committee of any said Assembly or Council.

(2) Subject to the above condition, a mofussil member of the Legislative Assembly or Legislative Council is entitled to draw Daily Allowance during a period of three days or less before the commencement of a meeting of Legislative Assembly or Legislative Council or any Committee thereof or at the conclusion of the meeting, in case he is required to attend the meetings of other Committees during that period. If however, any member of the Legislative Assembly or Legislative Council returns to his ordinary place of residence, he will entitled to draw Travelling Allowance only for the journey, provided the amount of Travelling Allowance drawn by him in no case exceeds the amount of Daily Allowance at the rate prescribed for Committees constituted by Government which would have been admissible to him had he elected to stay at the place where the meeting of Committees other than the Legislative Assembly or Legislative Council or any Committee thereof takes place.

(3) Where however such member returns to his ordinary place of residence within three days of conclusion of the meeting of the Legislature or a Committee thereof, not being aware of the meeting of a Committee constituted by the Government he will be entitled to draw normal Travelling Allowance without such allowance being so restricted.

11. Rules of Procedure for preferring Travelling Allowance Claims of Non-Official Members of Commissions and Committees:

(1) The existing procedure for disbursing in cash Travelling Allowance to Members of the Legislative Assembly and Legislative Council at the close of each Session and for payment of Travelling Allowance by the University in regard to the attendance at meetings connected with that body will continue unchanged. The Travelling Allowance bills of Members of the Legisiative Assembly and the Legislative Council serving as members of the Committees constituted by Government will be countersigned by the Secretary of the committee concerned and forwarded to the Secretary, Karnataka Legislative Assembly or Legislative Council, as the case may be, who will scrutinize them with reference to payments made by him and pass on the bill to the Treasury for payment with intimation to the Secretary of the Committee concerned.

(2) In respect of meetings of bodies other than those referred to in clause (1) above the Secretaries of the Commissions and Committees shall obtain, in addition to the other certificates contemplated in Part VIII of the Karnataka Civil Services Rules, the following certificate from the members.-

"Certified that I…………………………………….. Member .......................... Committee actually performed the journeys for which Travelling Allowance claimed and I have not drawn in any other capacity Travelling Allowance for the same journey or Daily Allowance or Sitting Fee for the same day".

(3) In addition to the above certificate which must be recorded by the members in their Travelling Allowance Bills, they should also furnish, in the following declaration Form, particulars of the dates and time of their arrival and departure, mode of conveyance used for the journey and other meetings, if any, attended by them at the place of meeting on the same day/days or within a period of three days prior to and after the meeting:-

**Declaration**

1. Name of the Member.
2. Place of Permanent residence.
3. Date and time of arrival at the place of meeting.
4. Particulars of journey performed;
   (i) Whether entire journey was by road.
   (ii) Mode of conveyance used for the road journey.
   (iii) if by rail, class in which travelled;
5. The number of days on which the Member has attended the Committee Meeting.
6. Date and time of departure from the place of Meeting.

7. Name of the other meeting, if any, attended on the same day/days or within a period of three days prior to and after the day/days noted against Serial No.5 above.

8. Name of Treasury at which payment is desired.

I undertake to refund any amount in respect of T.A. and D.A. for this meeting which is not admissible as per rules deducted in audit.

Date……………………….. Signature………………..………………..

For Member of the Committee

4) A certificate of attendance in the following form shall be recorded on the Travelling Allowance Bills of the members by the Secretary of the Committee:-

"Certified …………………………………………..that Shri/Smt ………………………………...………… attended the sittings of the Constituted in Government Order No……………………………………..date……………………………On …………..………………….at as a member thereof"

Secretary

(5) The T.A. bill prepared and signed by each member with the requisite certificates, will be sent to the Secretary of the Committee who after scrutiny of the claims preferred in the bill with reference to rules, will forward the bill with his countersignature to the Secretary, Karnataka Legislative Assembly or Legislative Council, as the case may be, in the case of claims of Members of the Legislature and to the Treasury Officers in the case of others.

(6) A copy of the intimation slip will be sent to the Secretary of the Committee by the Secretary, Karnataka Legislative Assembly or Legislative Council, as the case may be for noting down the particulars of the Travelling Allowance bills passed and onward transmission to the member, and another copy with the Travelling Allowance bill will be forwarded to the Treasury Officer for making payment direct to the member. In the case of members other than members of Legislature, the Secretary of the Committee will intimate the member concerned the fact of having forwarded the bill to the Treasury Officer for payment.

(7) Objections raised in audit will be communicated by the Accountant General, Karnataka, to the Secretary of the Committee for furnishing necessary information.

(8) The countersignature of the Secretaries is only to ensure that the bills have been prepared correctly with reference to the prescribed rules and rates of mileage, daily allowance and train fare and provision for expenditure made by Government for a particular Committee.

(9) In certain cases, even though a non-official member proceeds to the place of meeting but is prevented from attending the meeting, consequent on its postponement for want of quorum, Travelling Allowance and Daily Allowance admissible under the rules may be allowed to him. In such cases, the following certificate should be recorded on the bill by the Secretary.

"Certified that Sri/Smt ...............................................................attended the place of meeting of ……………………Committee on ............... at ………………. but the meeting did not take place on the date for want of quorum."

(10) The claims in respect of period (i) over six months require the sanction of the Head of the Department condoning the delay in preferring them, and (ii) over three years that of the Government of Karnataka. These claims require the pre-audit by the Accountant General, Karnataka vide Article 21 of the Karnataka Financial Code.

(11) In case of Committees or Commissions to which Government have not appointed Secretaries, the power of countersigning the T .A. bills of the non-official members shall be exercised by the Government servant authorized by Government in this behalf.

(12) When a member of Legislature appointed to a Committee, Commission or Board of Enquiry is allowed free boarding and lodging at the expense of State Government or an autonomous industrial or Commercial undertaking or Corporation, or a Statutory body or local authority, in which Government funds have been invested or in which Government have any other interest shall be entitled to only one-fourth of the Daily Allowance admissible to him under the aforesaid Notification. If only boarding or lodging is allowed free, daily allowance shall be admissible at one-half of the admissible rate.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



12. When the State Government appoint a Committee or Commission in which officers or employees of the Commercial Industrial undertakings of Central or State Government or Statutory Bodies controlled or financed by the Central or State Government are appointed as Members or are required to attend meetings of such Committees, etc., the expenses on their Travelling Allowance or Daily Allowance in that connection incurred in accordance with the rules in force in the parent Government or body should be borne by the Government or respective body, unless in any particular case it is decided otherwise.

13. The rules regulating the payment of Travelling Allowance in force immediately before the date of commencement of these rules applicable to person governed by these rules are repeated except in so far as they are applicable to payment of Travelling Allowances in respect of journey and halts made before the date of commencement of these rules.

By Order and in the name of the Governor of Karnataka,

**G.B. Hemanna**

Under Secretary to Government,

Finance Department (Services-1)

**P.R.-555**

**S.C.-1000**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.